



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 69

ಸಂಪುಟ: ೦೮ ಸಂಚಿಕೆ: ೧ | ಮೇ ೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 08 Issue2 | May 2021 | Pages - 8 | A. Sub. - Rs. 20/- | Editor : Sri. B.R. Ravindranath




ಶ್ರದ್ಧಾಂಜಲಿ

## ಪದ್ಮಶ್ರೀ ಪ್ರೊ. ಜಿ.ವೆಂಕಟಸುಬ್ಬಯ್ಯ ನಿಧನ



ನಾಡಿನ ಖ್ಯಾತ ಸಂಶೋದಕ, ನಿಘಂಟು ತಜ್ಞ ಪ್ರೊ.ಜಿ.ವೆಂಕಟಸುಬ್ಬಯ್ಯ ಅವರು ೧೯ನೇ ಏಪ್ರಿಲ್ ೨೦೨೧ ರಂದು ತಮ್ಮ ೧೦೮ ನೇ ವಯಸ್ಸಿನಲ್ಲಿ ನಿಧನರಾದರು.

ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಖ್ಯಾತ ವಿದ್ವಾಂಸರು ಹಾಗೂ ಜನಪ್ರಿಯ ಪ್ರಾಧ್ಯಾಪಕರು. ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಸುವರ್ಣ ಪದಕದೊಡನೆ ಎಂ.ಎ. ಪದವಿ, ನಂತರ ಬಿ.ಟಿ. ಪದವಿ ಗಳಿಸಿದರು. ಮಹಾರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿಯನ್ನು ಆರಂಭಿಸಿ, ನಂತರ ಬೆಂಗಳೂರಿನ ವಿಜಯಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಕೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿಗೆ ಅಖಿಲ ಕರ್ನಾಟಕ ವ್ಯಾಪ್ತಿಯನ್ನು ತಂದುಕೊಟ್ಟ ಹಿರಿಮೆ ಶ್ರೀಯುತರದು. ನಡೆದಾಡುವ ನಿಘಂಟು, ಶಬ್ದ ಬ್ರಹ್ಮ ಎಂದು ಜನಜನಿತರಾಗಿರುವ ಶ್ರೀಯುತರು ಸಾಹಿತ್ಯ ವಿಮರ್ಶೆ, ಸಂಶೋಧನೆ, ಅನುವಾದ, ನಿಘಂಟು ರಚನೆ ಕ್ಷೇತ್ರಗಳಲ್ಲಿ ಅಪಾರ ಸೇವೆ ಸಲ್ಲಿಕೆ. ೫೦ ಪುಸ್ತಕಗಳನ್ನು, ೧೪ ನಿಘಂಟುಗಳನ್ನು ಪ್ರಕಟಗೊಳಿಸಿರುವುದಲ್ಲದೆ 'ಇಗೋ ಕನ್ನಡ' ಎಂಬ ಅಂಕಣದಿಂದ ನಾಡಿನಲ್ಲಿ ಮನೆಮಾತಾಗಿದ್ದಾರೆ. ನಿಘಂಟು ಪರಿವಾರ, ಅಕ್ರೂರ ಚರಿತ್ರೆ (ಸಂಪಾದನೆ), ಇಗೋ ಕನ್ನಡ (ಸಾಮಾಜಿಕ ನಿಘಂಟು), ಗತಿ ಪ್ರಜ್ಞೆ, ಕನ್ನಡವನ್ನು ಉಳಿಸಿ ಬೆಳೆಸಿದವರು, ಅನುಕಲ್ಪನೆ, ಕರ್ಣ ಕರ್ಣಾಮೃತ ಮುಂತಾದವು ಪ್ರಮುಖ ಕೃತಿಗಳು.

೨೦೧೭ರಲ್ಲಿ ಅವರಿಗೆ ಭಾರತ ಸರ್ಕಾರದ ಪದ್ಮ ಶ್ರೀ ಗೌರವ ದೊರೆಯಿತು. ಅವರ ಪಾಂಡಿತ್ಯಕ್ಕೆ ಸಂದ ಪ್ರಶಸ್ತಿ ಪುರಸ್ಕಾರಗಳು ಹಲವಾರು. ಅವುಗಳಲ್ಲಿ ವಿದ್ಯಾಲಂಕಾರ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಶಂಬಾ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ, ಕಾಯಕ ಪ್ರಶಸ್ತಿ, ಪತ್ರಿಕಾ ಅಕಾಡೆಮಿ ವಿಶೇಷ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಹಂಪಿ ವಿಶ್ವವಿದ್ಯಾನಿಲಯದ ನಾಡೋಜ ಪ್ರಶಸ್ತಿ, ಅಂತರಾಷ್ಟ್ರೀಯ ನಿಘಂಟು ಸಮ್ಮೇಳನಗಳಿಗೆ ಆಹ್ವಾನ ಮುಂತಾದವು ಮುಖ್ಯವಾದವು.

ಬಿ.ಎಂ.ಶ್ರೀ ಪ್ರತಿಷ್ಠಾನದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾದ ಹಾಗೂ ಪ್ರತಿಷ್ಠಾನವು ೧೯೮೮ ರಿಂದ ನಿರಂತರವಾಗಿ ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಯ ಮೊದಲ ಸಂಪಾದಕರಾಗಿದ್ದ ಜಿ.ವಿ.ಯವರು ಇಂದಿನವರೆಗೂ ಪ್ರತಿಷ್ಠಾನದ ಜೊತೆ ನಿಕಟ ಸಂಪರ್ಕ ಹೊಂದಿದ್ದರು. ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ಪದ್ಮಶ್ರೀ ದೊರೆತು ಅಖಿಲ ಭಾರತದ ಮಟ್ಟದಲ್ಲಿ ಅವರಿಗೆ ಮನ್ನಣೆ ದೊರೆತ ಸಂದರ್ಭದಲ್ಲಿ ೧೭ನೇ ಏಪ್ರಿಲ್ ೨೦೧೭ ರಂದು ಅವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು. ಪ್ರೊ.ಜಿ. ವೆಂಕಟಸುಬ್ಬಯ್ಯ ಅವರು ಬಿ.ಎಂ.ಶ್ರೀ ಅವರ ವಿದ್ಯಾರ್ಥಿಗಳ ಪೈಕಿ ಈಗ ಬದುಕಿರುವವರು ತಾವು ಒಬ್ಬರೇ ಎಂದು ನುಡಿದರು.




ನಂತರ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಅಕ್ಕರಗೊಟ್ಟಿ ಕಾರ್ಯಕ್ರಮದ ಬಗ್ಗೆ ತಮಗೆ ವಿಶೇಷ ಆಸಕ್ತಿ ಇದೆ ಎಂದು ತಿಳಿಸಿದರು. ನಂತರ ಕುಮಾರವ್ಯಾಸ ಭಾರತದ ಶಲ್ಯ ಪರ್ವ, ೧ನೇ ಸಂಧಿ, ೨೫ನೇ ಪದ್ಯವನ್ನು ಓದಿ ಅದರ ವ್ಯಾಖ್ಯಾನ ಮಾಡಿ ಈ ಪದ್ಯದ ಬಗ್ಗೆ ತಮ್ಮ ಹೊಸ ಬಗೆಯ ಚಿಂತನೆಯನ್ನು ಮಂಡಿಸಿದರು.

## ಸಂಪಾದಕೀಯ

ಜಿವಿ ಎಂದರೆ ಎಲ್ಲರಿಗೂ ನಿಘಂಟು ತಜ್ಞ, ಸಂಶೋಧಕರು, ಶತಾಯುಶಿ ಎಂದು ನೆನಪಿಗೆ ಬರುವುದು ಸಹಜ. ಅವರೊಂದಿಗೆ ಸಂಪರ್ಕ ಹೊಂದಿದ್ದಂತಹವರಿಗೆ ಜಿವಿ ಎಂದರೆ ಅವರ ಸರಳತೆ, ಸಜ್ಜನಿಕೆ, ಆತ್ಮೀಯತೆ ಹಾಗೂ ಅವರ ಪ್ರೋತ್ಸಾಹ ಇವುಗಳೇ ಮೊದಲು ನೆನಪಿಗೆ ಬರುತ್ತವೆ.

ಸುಮಾರು ೩೦ ವರ್ಷಗಳಿಗೂ ಹಿಂದಿನಿಂದ ಅವರನ್ನು ಭೇಟಿ ಮಾಡುತ್ತಿರುವ ಸಯೋಗ ನನ್ನದಾಗಿತ್ತು. ೨೦೦೨ರಲ್ಲಿ ನಾನು ಭಾಷಾಂತರ ಅಧ್ಯಯನ ಸಂಸ್ಥೆಯನ್ನು ಅಳುಕತ್ತಲೇ ಪ್ರಾರಂಭಿಸಿದಾಗ ಜಿವಿ ಅವರು ಮಾರ್ಗದರ್ಶನ ನೀಡಿದರು. ಮುಂದೆ ಹಲವಾರು ವರ್ಷಗಳ ಕಾಲ ಅವರನ್ನು ಆಗಾಗ್ಗೆ ಭೇಟಿ ಮಾಡಿ ಅವರ ಮಾರ್ಗದರ್ಶನ ಪಡೆಯುತ್ತಿದ್ದೆ. ನಾವು ಸಂಘಟಿಸುತ್ತಿದ್ದ ಭಾಷಾಂತರಕ್ಕೆ ಸಂಬಂಧಿಸಿದ ಸಭೆಗಳಲ್ಲಿ ಅವರು ಸಂತೋಷದಿಂದ ಭಾಗವಹಿಸುತ್ತಿದ್ದರು, ಅವರಿಗೆ ನಾನು ಚಿರಋಣಿಯಾಗಿದ್ದೇನೆ.

ನಲವತ್ತು ವರ್ಷಗಳಿಂದಲೂ ಬಿಎಂಶ್ರೀ ಪ್ರತಿಷ್ಠಾನದ ಪ್ರವರ್ತಕ ಸದಸ್ಯರಾಗಿ, ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಯ ಪ್ರಥಮ ಸಂಪಾದಕರಾಗಿ, ಸಕ್ರಿಯ ಸದಸ್ಯರಾಗಿ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಅವರ ಪ್ರೋತ್ಸಾಹ ಮತ್ತು ಸಹಕಾರ ಯಾವಾಗಲೂ ಲಭ್ಯವಾಗುತ್ತಿತ್ತು. ನಾವ್ಯಾರೂ ಮರೆಯಲಾಗದಂತಹ ಮರೆಯಬಾರದಂತಹ ವ್ಯಕ್ತಿತ್ವದ ನೆನಪನ್ನು ನಮ್ಮೆಲ್ಲರಲ್ಲಿ ಉಳಿಸಿಹೋಗಿದ್ದಾರೆ.ಜಿವಿ ಅಂತಹ ಮತ್ತೊಬ್ಬ ಮಹಾನ್ ವ್ಯಕ್ತಿಯನ್ನು ನಮ್ಮ ಶೇಷಾಯುಷ್ಯದಲ್ಲಿ ಕಾಣುವಂತಹ ಸಾಧ್ಯತೆಗಳು ಇಲ್ಲದಿರಬಹುದು.

ಪದ್ಮಶ್ರೀ ನಾಡೋಜ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯ ಅವರಿಗೆ ನಮ್ಮ ಅನಂತ ನಮನಗಳು.

– ಬಿ.ಆರ್. ರವೀಂದ್ರನಾಥ

೩ನೇ ಪುಟದಿಂದ

ಭೋಗವನ್ನು ಅನುಭವಿಸಬೇಕೆಂಬ ತೀವ್ರವಾದ ಆಸೆಯೇ 'ಭೋಗತೃಷ್ಣೆ': "ತನ್ನ ಭೋಗತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ" ('ಆದಿಪುರಾಣ'). ಭೋಗಿಸುವವನೇ 'ಭೋಗಿ', ಅಂ-ದರೆ ರಸಿಕ. "ಮಾಲೆಗಾಱಿನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ" ಎಂಬುದು ಜನ್ನನ 'ಅನಂತನಾಥಪುರಾಣ'ದ ಮಾತು.

ಭೋಗವನ್ನು ಅನುಭವಿಸುವ ಭೂಮಿಯೇ 'ಭೋಗಭೂಮಿ'. ಸತ್ತಮೇಲೆ ಪುಣ್ಯಫಲಗಳನ್ನು ಅನುಭವಿಸುವ ಸ್ವರ್ಗವನ್ನೇ ಭೋಗಭೂಮಿ ಎನ್ನುತ್ತಿದ್ದರು. ಅಗ್ಗಳನು ತನ್ನ 'ಚಂದ್ರಪ್ರಭಪುರಾಣ'ದಲ್ಲಿ 'ಭೋಗಭೂತಲ' ಎಂಬ ಶಬ್ದವನ್ನು ಈ ಪದಕ್ಕೆ ಸಮಾನಾರ್ಥಕವಾಗಿ ಬಳಸಿದ್ದಾನೆ: "ತನ್ನೊಳೆ ಸರಿದೊರೆ ಸುರರೇಂ ಭೋಗಭೂತಲಂ ಸುಖಮಯಮೋ". ಹೀಗಾಗಿ ಪುಣ್ಯವಂತರು ಹುಟ್ಟುವ ಪ್ರದೇಶವನ್ನು ಪೊನ್ನ ತನ್ನ 'ಶಾಂತಿಪುರಾಣ'ದಲ್ಲಿ ಈ ಹೆಸರಿನಿಂದ ಕರೆದಿದ್ದಾನೆ: "ಈ ಭರತಾವನಿ ಭೋಗಭೂಮಿ ಭೂಭಾಗಿ ಸುಖಾಪ್ತಿಯಂ ಪಡೆದುದು." ಪಂಪನು 'ಆದಿಪುರಾಣ'ದಲ್ಲಿ 'ಭೋಗಭೂಮಿ'ಯನ್ನು ಒಂದೆಡೆ 'ಸುಖದ ಭೂಮಿ' ಎಂಬರ್ಥದಲ್ಲಿ ಬಳಸಿದರೂ ("ಉತ್ತರಕುರುವೆಂಬ ಭೋಗಭೂಮಿಯೆ ಜನ್ಮಭೂಮಿಯಾದುದು") ಅದನ್ನು ಬೇರೆ ರೀತಿಯಲ್ಲಿಯೂ ಅರ್ಥೈಸುತ್ತಾನೆ: "ಭೋಗಭೂಮಿವಿರಾಮದೊಳ್ ಈ ಕರ್ಮಭೂಮಿ ಪ್ರಾರಂಭದೊಳ್" ಎಂಬ ಮಾತುಗಳಲ್ಲಿ ಮನುಷ್ಯರಿಗೆ ಪ್ರಕೃತಿಯಲ್ಲಿ ತಾನಾಗಿ ಆಹಾರ ಸಿಕ್ಕುತ್ತಿದ್ದ ಸ್ಥಿತಿಯನ್ನು 'ಭೋಗಭೂಮಿ' ಎಂದೂ ಗೆಯ್ಮೆ ಮಾಡಿ ಆಹಾರ ಬೆಳೆದುಕೊಳ್ಳಬೇಕಾದ ಸ್ಥಿತಿಯನ್ನು 'ಕರ್ಮಭೂಮಿ' ಎಂದೂ ವಿಭೇದ ಮಾಡುತ್ತಿದ್ದಾನೆ.

=====

## ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಬಿ. ಎಂ. ಶ್ರೀ. ಪ್ರತಿಷ್ಠಾನ ಅನುವಾದ ಕಮ್ಮಟ

**ಉದ್ಘಾಟನಾ ಸಮಾರಂಭ : ೦೨-೦೪-೨೦೨೧**

**ಸಮಾರೋಪ ಸಮಾರಂಭ : ೦೪-೦೪-೨೦೨೧**



ಇತ್ತೀಚಿನ ದಿನಗಳಲ್ಲಿ ದೈನಂದಿನ ವ್ಯವಹಾರಗಳ ಸಂಬಂಧದಲ್ಲಿ ಅನೇಕ ಕ್ಷೇತ್ರಗಳಿಂದ ಅನುವಾದ ಕಾರ್ಯಕ್ಕಾಗಿ ಬರುತ್ತಿರುವ ಬೇಡಿಕೆಗಳನ್ನು ಗಮನದಲ್ಲಿಟ್ಟುಕೊಂಡು ಆ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ಅರ್ಹ ಅನುವಾದಕರನ್ನು ಸಿದ್ಧಪಡಿಸುವ ನಿಟ್ಟಿನಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಸರಣಿ ಅನುವಾದ ಕಮ್ಮಟಗಳನ್ನು ಇತರ ಸಂಸ್ಥೆಗಳೊಂದಿಗೆ ನಡೆಸಲು ನಿರ್ಧರಿಸಿತು. ಇದರ ಮುಂದುವರಿಕೆಯಾಗಿ, ಬೆಂಗಳೂರಿನ ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದೊಂದಿಗೆ ಏಪ್ರಿಲ್ ೨, ೩, ೪ರಂದು ಮೂರು ದಿನಗಳ ಅನುವಾದ ಕಮ್ಮಟವನ್ನು ಯಶಸ್ವಿಯಾಗಿ ನಡೆಸಲಾಯಿತು. ಇದರ ಆಯೋಜಕರಾಗಿ, ಶಿಬಿರ ನಿರ್ದೇಶಕರಾಗಿ ಡಾ.ಅಬ್ದುಲ್ ರೆಹಮಾನ್ ಪಾಷಾರವರು (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರು) ಚಟುವಟಿಕೆಯ ವೇಳಾಪಟ್ಟಿ, ವಿಷಯ ಸೂಚಿ, ಅಭ್ಯಾಸ ಕ್ರಮಗಳು, ಸಂಪನ್ಮೂಲವ್ಯಕ್ತಿಗಳು, ತರಗತಿಗಳಲ್ಲಿನ ಚರ್ಚೆ ಸೂಚಿಗಳು ಮುಂತಾದ ವಿಷಯಗಳಲ್ಲಿ ವಿಶೇಷ ಗಮನವಹಿಸಿ ಶಿಬಿರವನ್ನು ಯಶಸ್ವಿಯಾಗಿ ಸಂಪನ್ನಗೊಳಿಸಿದರು. ಈ ಕಾರ್ಯದಲ್ಲಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಟಿ.ಎಸ್.ನಾಗಾಭರಣ ಹಾಗೂ ಕಾರ್ಯದರ್ಶಿಗಳಾದ ಡಾ. ಗವಿಸಿದ್ದಯ್ಯನವರು ಎಲ್ಲಾ ರೀತಿಯ ಸಹಕಾರವನ್ನು ನೀಡಿದ್ದಾರೆ. ಬಿ.ಎಂ.ಶ್ರೀ ಪ್ರತಿಷ್ಠಾನದ ವತಿಯಿಂದ ಡಾ. ಆರ್. ಲಕ್ಷ್ಮೀನಾರಾಯಣ, ಡಾ. ಹೆಚ್.ಎಸ್.ಎಂ. ಪ್ರಕಾಶ್ ಹಾಗೂ ಡಾ.ಬಿ.ಸಿ. ರಾಜಕುಮಾರ್‌ರವರು, ಸಂಪನ್ಮೂಲ ವ್ಯಕ್ತಿಗಳಾಗಿ ಉಪನ್ಯಾಸಗಳನ್ನು ನೀಡುವುದರ ಮೂಲಕ ಹಾಗೂ ಸಭಾಂಗಣದ ವ್ಯವಸ್ಥೆಗಳನ್ನು ನಿರ್ವಹಿಸುವುದರ ಮೂಲಕ ಸಕ್ರಿಯವಾಗಿ ಭಾಗವಹಿಸಿದರು.

ಈ ಶಿಬಿರದಲ್ಲಿ ಒಟ್ಟು ೨೬ ಶಿಬಿರಾರ್ಥಿಗಳು ಭಾಗವಹಿಸಿದ್ದರು. ಇವರಲ್ಲಿ ಕೆಲವರು ಸಾಫ್ಟ್‌ವೇರ್ ಕಂಪೆನಿಗಳ ಉದ್ಯೋಗಿಗಳು, ಕಾಲೇಜು ಅಧ್ಯಾಪಕರುಗಳು, ಬ್ಯಾಂಕ್ ಉದ್ಯೋಗಿಗಳು, ವೃತ್ತಿ ನಿರತ ಯುವ ಅನುವಾದಕರುಗಳು ಇದ್ದಾರೆ. ಆಯ್ಕೆಯ ನಂತರ ಅವರಿಗೆ ಪೂರ್ವಭಾವಿ ತಯಾರಿಕಾ ಮಾಹಿತಿಯನ್ನು ನೀಡಿದ್ದರಿಂದಾಗಿ ಅವರುಗಳು ಸಾಕಷ್ಟು ಬೌದ್ಧಿಕ ಸಿದ್ಧತೆ ಮಾಡಿಕೊಂಡು ಶಿಬಿರದಲ್ಲಿ ಭಾಗವಹಿಸಿದ್ದರಿಂದ ಮೂರೂ ದಿನಗಳ ಗೋಷ್ಠಿಗಳು ಸಮಯಕ್ಕೆ ಬದ್ಧವಾಗಿ ಯಶಸ್ವಿಯಾಗಿ ನಡೆದವು.

೬ನೇ ಪುಟಕ್ಕೆ

# ಮೇ ೨೦೨೧ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ಜಾಲಗೋಷ್ಠಿ –ಕಾರ್ಯಕ್ರಮ

ದಿನಾಂಕ : ೧೨ –೦೫–೨೦೨೧ ಬುಧವಾರ ಸಂಜೆ : ೪–೩೦ ಗಂಟೆಗೆ
ಕ.ವೆಂ. ರಾಘವಾಚಾರ್–ಡಿ.ವಿ.ಗುಂಡಪ್ಪ–ಬಿ.ಎಸ್. ಸಣ್ಣಯ್ಯ– ಡಾ.ಎಂ.ಎಲ್. ಲಲಿತಮ್ಮ ದತ್ತಿ ಕಾರ್ಯಕ್ರಮ
'ಮರೆಯ ಬಾರದ ಸಾಹಿತಿ ಶ್ರೇಷ್ಠರು' ಮಾಲಿಕೆ
ಉಪನ್ಯಾಸಕರು : ಡಾ. ಸಿ.ಪಿ.ನಾಗರಾಜ್
ನಿವೃತ್ತ ಪ್ರಾಧ್ಯಾಪಕರು
ವಿಷಯ : ಶ್ರೀಕಂಠೇಶಗೌಡರು : ವ್ಯಕ್ತಿ ಮತ್ತು ಸಾಹಿತ್ಯ

ದಿನಾಂಕ : ೧೯–೦೫–೨೦೨೧ ಬುಧವಾರ ಸಂಜೆ : ೪–೩೦ ಗಂಟೆಗೆ
ವೈಯಾಕರಣಿ ಗರಣಿ ಕೃಷ್ಣಚಾರ್ಯ ದತ್ತಿ ಕಾರ್ಯಕ್ರಮ
ಉಪನ್ಯಾಸಕರು : ಡಾ. ಬಿ. ರಾಜಶೇಖರಪ್ಪ
ಖ್ಯಾತ ಸಂಶೋಧಕರು, ನಿವೃತ್ತ ಪ್ರಾಧ್ಯಾಪಕರು
ವಿಷಯ : 'ನನ್ನಿ ಯೊಳಿನತನಯಂ' ಎಂಬ ಪಂಪನ ಮಾತಿನ 'ನನ್ನಿ' ಎಂದರೆ ಏನು?



## ಪದಚರಿತೆ




ಒಂದಷ್ಟು ಪದಗಳ
ಮೂಲಚೂಲಗಳ ಹುಡುಕಾಟ
– ಡಾ. ಪಿ.ವಿ. ನಾರಾಯಣ

ಬೇಸಾಯ: ಇದು ಸಂಸ್ಕೃತದ 'ವ್ಯವಸಾಯ' ಎಂಬ ಶಬ್ದದ ತದ್ಭವ. ಇದು ಹಿಂದಿನ ಕಾವ್ಯಗಳಲ್ಲಿ ಬೆವಸಾಯ, ಬವಸ, ಬವಸು ಮುಂತಾದ ರೂಪಗಳಲ್ಲಿಯೂ ದೊರೆಯುತ್ತದೆ. "ಎರಡಾರ ಬೆವಸಾಯಂ; ಹತ್ತು ಹಸುಕಜಿಹ" ಎಂಬುದು 'ಪಂಚತಂತ್ರ'ದ ಮಾತು. "ಬೆವಸಾಯವ ಮಾಡಿ ಬೀಯಕ್ಕೆ ಬತ್ತವಿಲ್ಲರ್ದಡೆ" ಎಂಬುದು ಅಲ್ಲಮಪ್ರಭುವಿನ ವಚನದ ಭಾಗ. "ಬವಸೆಂದು ವ್ಯವಸಾಯಂ" ಎಂದು 'ಶಬ್ದಮಣಿದರ್ಪಣ' ಅರ್ಥ ಕೊಡುತ್ತದೆ. "ದಾರುಣ ಸಂಸರಣ ವಿಷೋರ್ವೀರುಹಮಂ ಕೀೞ್ವ ಬವಸೆಯಿಂದಿರ್ದಪನೀ ಧೀರಂ" ಎಂಬುದು 'ಪಂಪರಾಮಾಯಣ'ದಲ್ಲಿ ಬರುವ ಮಾತು. "ಗೆಲವೇನಿಲ್ಲದ ಯುದ್ಧ ಪಾಳುನೆಲದೊಳ್ ಬೇಸಾಯ" ಎಂಬುದು 'ಸೋಮೇಶ್ವರ ಶತಕ'ದ ಮಾತು. ಹನ್ನೆರಡನೆ ಶತಮಾನದ ಶಾಸನವೊಂದರಲ್ಲಿ "ಆತನ ಬ್ಯವಸಾಯ ಬ್ಯವಹಾರವೆನ್ತೆನೆ" ಎಂಬ ಪ್ರಯೋಗವಿದೆ. ಬೇಸಾಯ ಮಾಡುವವನೇ 'ಬೇಸಾಯಗಾರ'. ಎಂ.ಆರ್. ಶ್ರೀ. ವಚನಕಾರರನ್ನು "ಅಚ್ಚಗನ್ನಡದ ಬೇಸಾಯಗಾರರು" ಎಂದು ಕರೆಯುತ್ತಾರೆ.

ಬೆವಸಾಯ ಎಂಬ ಶಬ್ದವನ್ನು 'ಧರ್ಮಾಮೃತ'ವು ಪ್ರಯತ್ನ ಎಂಬರ್ಥದಲ್ಲಿ ಬಳಸುತ್ತದೆ: "ಪುಣ್ಯಮಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂದೆಯಪ್ಪೊಡೆ". 'ಪಂಪಭಾರತ'ದಲ್ಲಿ 'ಬೆವಸಾಯಂಗೆಯ್' ಎಂಬ ನುಡಿಗಟ್ಟಿನ ಅರ್ಥ ಪ್ರಯತ್ನ ಮಾಡು ಎಂದು: "ಬೆವಸಾಯಂಗೆಯಲ್ ಇನ್ನುಮುಂಟು ಎಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂಡವರಂ ಗೆಲ್ವುದಸಾಧ್ಯಮಾಯ್ತೇ". ಸಿದ್ಧತೆಯನ್ನು ಶಾಸನವೊಂದು 'ಬವಸ' ಎನ್ನುತ್ತದೆ: "ಕವಿದುರ್ಗ್ಗಂ ಚಾತುರಂಗಂ ಬವಸ ದಳವುಳಂ" (ಹನ್ನೊಂದನೆಯ ಶತಮಾನದ ಶಾಸನ). ವೃತ್ತಿ, ಕೆಲಸ ಎಂಬರ್ಥದಲ್ಲಿ ಬವಸ ಎಬ ಶಬ್ದವನ್ನು ಅಗ್ಗಳನ 'ಚಂದ್ರಪ್ರಭಪುರಾಣ' ಬಳಸುತ್ತದೆ: "ಎನಗೆ ಮನೋಭವನೆ ದೇವಂ ಬಸನಮೆ ಬವಸಂ ಬಲವೆ ಕುಲಧನಂ".

ವ್ಯವಸಾಯ ಶಬ್ದವೂ ಬಳಕೆಯಲ್ಲಿದೆ. ಮೂಲತಃ ಈ ಅರ್ಥಕ್ಕೆ ಸಂಸ್ಕೃತದಲ್ಲಿ ಪ್ರಯತ್ನ, ನಿಶ್ಚಯ, ಆಚರಣೆ ಮುಂತಾದ ಅರ್ಥಗಳಿವೆ. ಈ ಪದಕ್ಕೆ ಕನ್ನಡದಲ್ಲಿ ಕೃಷಿ ಎಂಬರ್ಥದ ಜೊತೆ–ಗೆ ಪ್ರಯತ್ನ ಎಂಬರ್ಥವಿದೆ. "ಈತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದ ಏರ್ಮ್ಮೆಗಳೊಳೊಂದುಮಂ ಕೊಳ್ಳದೆ" ಎಂಬ ಶಾಂತಿನಾಥನ 'ಸುಕುಮಾರಚರಿತೆ'ಯ ಮಾತಿನಲ್ಲಿ ಈ ಅರ್ಥವಿದೆ. ಪ್ರಯತ್ನ ಮಾಡದವನನ್ನು 'ಸಮಯ ಪರೀಕ್ಷೆ' "ಬೆವಸಾಯಹೀನ" ಎಂದು ಕರೆಯುತ್ತದೆ. ಅದೇ ಉತ್ಸಾಹದಿಂದ ಕೆಲಸಮಾಡುವವನನ್ನು 'ಮಹಾವ್ಯವಸಾಯಿ' ಎನ್ನುತ್ತದೆ: "ಭುವನೈಕಮಲ್ಲದೇವನ ಭವನದೊಳಂ ತಾನೆ ಮಾನಸಂ ತಾನೆ ಮಹಾವ್ಯವಸಾಯಿ." ವ್ಯವಸಾಯ ಮಾಡುವವನೇ ವ್ಯವಸಾಯಗಾರ.

=====

ಭೋಗ೧: ಈ ಸಂಸ್ಕೃತಮೂಲದ ಶಬ್ದವು ವ್ಯಾಪಕವಾಗಿ ಬಿಡಿಯಾಗಿಯೂ ಸಮಾಸಗಳಲ್ಲಿಯೂ ಬಳಕೆಯಲ್ಲಿದೆ. "ಭೋಗಂ ವಿಷಯಾನುಭಂ" ಎಂದು ನಾಗವರ್ಮನ 'ಅಭಿಧಾನ ವಸ್ತುಕೋಶ'ವು ಸೂತ್ರಬದ್ಧವಾಗಿ ಹೇಳುತ್ತದೆ. ವಿಷಯಾನುಭವ ಎಂದರೆ ಇಂದ್ರಿಯಾನುಭವಗಳು. ಹೀಗಾಗಿ ಸುಖವನ್ನು ತರುವ ವಸ್ತುಗಳೂ ಭೋಗಗಳೇ: "ಅಮರಾಧಿಪಪ್ರಹಿತಸುರತರುಪ್ರಸೂನಗ್ರಥಿತ .. .. ಸುರಭಿವಿಲೇಪನ ಪ್ರಮುಖ ಭೋಗೋಪಭೋಗಂಗಳೊಳಂ" ಎಂಬುದು 'ಆದಿಪುರಾಣ'ದ ಮಾತು. ಇಲ್ಲಿ ಬಂದಿರುವ 'ಉಪಭೋಗ'ವೂ ವಿಷಯಸುಖ ಎಂಬರ್ಥವುಳ್ಳದ್ದು. 'ಅಭಿಧಾನ ವಸ್ತುಕೋಶ'ದಲ್ಲಿಯೇ "ಅನುಭವಂ ಉಪಭೋಗಂ" ಎಂಬರ್ಥ ಹೇಳಿದೆ. ಹೀಗೆ ಅನುಭವಿಸಬಹುದಾದುದೇ 'ಉಪಭೋಗ್ಯ'. ಪಂಪನ 'ಆದಿಪುರಾಣ'ದಲ್ಲಿನ "ಎನಗೊರ್ವಂಗುಪಭೋಗ್ಯಮಲ್ತು ವಸುಧಾ ಸಾಮ್ರಾಜ್ಯಂ ಓರಂತೆ ನಿಮ್ಮನಿಬರ್ಗಂ" ಎಂಬ ಮಾತನ್ನು ಗಮನಿಸಿ. 'ಅನುಭೋಗ' ಎಂದರೂ ವಿಷಯಸುಖವೇ. "ತನ್ನ ಸತಿಯುಂ ತಾನುಂ ಸುರತಾನುಭೋಗದಲಿ" ಎಂಬುದು ಭೀಮಕವಿಯ 'ಬಸವಪುರಾಣ'ದ ಮಾತು.

೨ನೇಪುಟಕ್ಕೆ

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೬-೩-೨೦೨೧

## ಡಾ. ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರ ನೆನಪಿನಲ್ಲಿ ಶ್ರದ್ಧಾಂಜಲಿ ಸಭೆ




ಕನ್ನಡ ಸಾಹಿತ್ಯದ ಮೇರು ಸಾಹಿತಿ, ಅಚ್ಚುಮೆಚ್ಚಿನ ಪ್ರಾಧ್ಯಾಪಕ, ಜನಪ್ರಿಯ ಕವಿ ಡಾ.ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ ಸವಿ ನೆನಪಿನಲ್ಲಿ ಶ್ರದ್ಧಾಂಜಲಿ ಸಭೆಯನ್ನು ಎಂ.ವಿ.ಸೀತಾರಾಮಯ್ಯ ಸಭಾಂಗಣದಲ್ಲಿ ಖ್ಯಾತ ಸಾಹಿತಿ ಡಾ. ನಾಡೋಜ ಹಂ.ಪ.ನಾಗರಾಜಯ್ಯನವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ನಾಡಿನ ಖ್ಯಾತ ಸಾಹಿತಿಗಳು ಮತ್ತು ಗಾಯಕರುಗಳು ನುಡಿನಮನ ಹಾಗೂ ಗೀತನಮನಗಳ ಮೂಲಕ ದಿವಂಗತ ಡಾ. ಭಟ್ಟರಿಗೆ ತಮ್ಮ ಗೌರವವನ್ನು ಸಲ್ಲಿಸಿದರು.

ಡಾ. ಭಟ್ಟರ ಸಾಹಿತ್ಯಾಭಿಮಾನಿಗಳಾದ, ಅಮೇರಿಕಾದಲ್ಲಿ ನೆಲೆಸಿರುವ ಡಾ. ಹೊಸಕೆರೆ ಚಂದ್ರಶೇಖರ್ ಮತ್ತು ಶ್ರೀಮತಿ ಶ್ರೀ ದೇವಿ ಚಂದ್ರಶೇಖರ್‌ರವರು ಉಪಸ್ಥಿತರಿದ್ದರು. ಕು। ಶ್ರೇಯಸ್ಸ್ ಕುಮಾರ್‌ರವರು ಡಾ. ಭಟ್ಟರ ಜನಪ್ರಿಯ ಕವನಗಳನ್ನು ಸೊಗಸಾಗಿ ಹಾಡಿದರು. ಜನಪ್ರಿಯ ಗಾಯಕರಾದ ಡಾ. ಮುದ್ದುಕೃಷ್ಣ ಮತ್ತು ಡಾ. ಕಿಕ್ಕೇರಿ ಕೃಷ್ಣಮೂರ್ತಿಯವರು ಡಾ. ಭಟ್ಟರ ನೆನಪನ್ನು ಗೀತಗಾಯನದ ಮೂಲಕ ಹಸಿರಾಗಿಸಿದರು.

ಖ್ಯಾತ ಕವಿಗಳಾದ ಶ್ರೀ ಬಿ.ಆರ್.ಲಕ್ಷ್ಮಣರಾವ್‌ರವರು ತಮ್ಮ ಮಧುರ ಸ್ನೇಹವನ್ನು ನೆನಪಿಸಿಕೊಳ್ಳುತ್ತ, ನಿಸಾರ್ ಅಹಮದ್ ಅವರು ತಮ್ಮ ನಿತ್ಯೋತ್ಸವ ಕವಿತೆಯ ಮೂಲಕ ಭಾವಗೀತೆಗಳಿಗೆ ನೀಡಿದ ಹೊಸ ಆಯಾಮವನ್ನು ವಿಶ್ವದಾದ್ಯಂತ ವಿಸ್ತರಿಸಿದ ಕೀರ್ತಿ ಡಾ. ಲಕ್ಷ್ಮೀನಾರಾಯಣ ಭಟ್ಟರಿಗೆ ಸಲ್ಲುತ್ತದೆ. ಸುಮಧುರ ಭಾವಗೀತೆಗಳಿಂದಲೇ ಅವರು ಜನಸಾಮಾನ್ಯರಿಗೆ ಆಪ್ತರಾದರು ಎಂದು ಹೇಳಿದರು. ಉತ್ತರ ಕರ್ನಾಟಕದ ಭಾಗಗಳಲ್ಲಿ ಪರಿಚಿತವಾಗಿದ್ದ ಸಂತ ಶಿಶುನಾಳ ಷರೀಫ್ ಸಾಹೇಬರ ಅನುಭಾವ ಗೀತೆಗಳನ್ನು ಭಟ್ಟರು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರು.

ಅಶ್ವತ್ಥ್, ಶಿವಮೊಗ್ಗ ಸುಬ್ಬಣ್ಣ ಮುಂತಾದ ಖ್ಯಾತ ಗಾಯಕ-ರಿಂದ ಅವುಗಳನ್ನು ಹಾಡಿಸಿ ಕನ್ನಡಿಗರೆಲ್ಲರ ನಾಲಿಗೆಯ ಮೇಲೆ ನಲಿಯುವಂತೆ ಮಾಡಿದರು. ಇದರಿಂದಾಗಿ ಅವರಿಗೆ ಶರೀಫ್ ಭಟ್ಟ ಎಂಬ ಬಿರುದು ಕೂಡ ಸಂದಿತ್ತು. ಇಂದು ರೇಡಿಯೋ, ಟಿ.ವಿ., ಧ್ವನಿ ಸಾಂದ್ರಿಕೆಗಳು ಮತ್ತು ಅಂತರ್ಜಾಲದಲ್ಲಿ ಅತ್ಯಂತ ಪ್ರಚಲಿತವಾಗಿರುವುದು ಹೆಚ್ಚಾಗಿ ಅವರ ಭಾವಗೀತೆಗಳೇ ಆಗಿವೆ ಎಂದರು.

ಖ್ಯಾತಸಾಹಿತಿ ವಿಜಯಾ ಸುಬ್ಬರಾಜ್‌ರವರು ಮಾತನಾಡಿ, "ಭಟ್ಟರ ವಿದ್ಯಾರ್ಥಿಯಾಗಿ, ಹೇಳಬೇಕೆಂದರೆ ಅವರು ಒಬ್ಬ ಅತ್ಯುತ್ತಮ ಪ್ರಾಧ್ಯಾಪಕರಾಗಿದ್ದರು, ಛಂದಸ್ಸನ್ನು ಮನಮುಟ್ಟುವಂತೆ ಬೋಧಿಸುತ್ತಿದ್ದರು" ಎಂದು ಹೇಳಿದರು.

ಸುಗಮ ಸಂಗೀತ ಕ್ಷೇತ್ರವು ಭಟ್ಟರನ್ನು ಎಂದಿಗೂ ಮರೆಯುವಂತಿಲ್ಲ. ಅವರಿಂದಾಗಿಯೇ ಧ್ವನಿಸುರಳಿಯ ಅಲೆ ಆರಂಭವಾಗಿ ಭಾವಗೀತೆಗಳು ಜನಮಾನಸ ತಲುಪಿದವು ಎಂದು ಖ್ಯಾತ ಗಾಯಕ ವೈ.ಕೆ. ಮುದ್ದುಕೃಷ್ಣ ಹೇಳಿದರು. ಅವರ ಸಹೋದ್ಯೋಗಿಯಾಗಿ ವಿಚಾರಬೇಧವಿದ್ದರೂ, ಭಟ್ಟರ ವಿದ್ಯಾರ್ಥಿಯಾಗಿದ್ದ ಡಾ. ಬಸವರಾಜ ಕಲ್ಗುಡಿಯವರು ಡಾ. ಭಟ್ಟರ ಕಾಯಕ ನಿಷ್ಠೆಯನ್ನು ಮೆಚ್ಚಿ ಅವರು ಭಾವಗೀತೆಗೆ ಹೊರಳದಿದ್ದಲ್ಲಿ ಮತ್ತಷ್ಟು ಒಳ್ಳೆಯ ಕಾವ್ಯಗಳನ್ನು ಬರೆಯಬಹುದಿತ್ತು ಎಂದರು.

ಡಾ. ಆರ್. ಲಕ್ಷ್ಮೀನಾರಾಯಣರವರು ಮಾತನಾಡುತ್ತ, ಭಟ್ಟರು ನವೋದಯ ಕಾಲದ ಶ್ರೇಷ್ಠ ಕವಿಗಳಲ್ಲಿ ಒಬ್ಬರು, ಅದರಲ್ಲೂ ವಿಶೇಷವಾಗಿ ಶ್ರೇಷ್ಠ ಶಿಶುಸಾಹಿತ್ಯವನ್ನು ಕನ್ನಡ ಸಾಹಿತ್ಯಕ್ಕೆ ವಿಶೇಷ ಕೊಡುಗೆಯಾಗಿ ನೀಡಿದ್ದಾರೆ ಎಂದರು.

ಸೊಗಸಾದ ಭಾಷಣಕಾರರಾಗಿದ್ದರು ಎಂದು ಅವರನ್ನು ನೆನೆಸಿಕೊಂಡರು. ಡಾ.ಹಂಪನಾರವರು, ತಮ್ಮ ಸಹಪಾಠಿಯಾಗಿದ್ದ ಡಾ. ಭಟ್ಟರ ಸುದೀರ್ಘ ಕನ್ನಡ ಸಾಹಿತ್ಯ ಸೇವೆಯನ್ನು ಭಾವುಕರಾಗಿ ನೆನೆಸಿಕೊಂಡರು. ತೀನಂಶ್ರೀ. ಡಿಎಲ್‌ಎನ್, ಕುವೆಂಪುರವರ, ತ.ಸು.ಶಾ. ಅವರ ಗರಡಿಯಲ್ಲಿ ಪಳಗಿದ್ದ ಡಾ. ಭಟ್ಟರು ಪ್ರಾಚೀನ ಸಾಹಿತ್ಯವನ್ನು ಚೆನ್ನಾಗಿ ಮನನ ಮಾಡಿಕೊಂಡಿದ್ದರು. ಅದರಿಂದಾಗಿ ಅವರ ತರಗತಿಗಳು ಎಂದೂ ಚೇತೋಹಾರಿಯಾಗಿದ್ದುವು ಎಂದು ಹೇಳಿದರು. ಡಾ. ಎಂ.ಹೆಚ್. ಕೃಷ್ಣಯ್ಯನವರೂ ಸಹ ತಮ್ಮ ಒಡನಾಟದ ಸವಿನೆನಪನ್ನು ಸಭೆಯ ಮುಂದಿಟ್ಟರು.

ಕಾರ್ಯಕ್ರಮದ ನಿರೂಪಣೆಯನ್ನು ಡಾ. ಹೆಚ್.ಎಸ್. ಎಂ. ಪ್ರಕಾಶ್ ನಡೆಸಿಕೊಟ್ಟರು.

### ಪ್ರಕಟಣೆ

### ಹಳಗನ್ನಡ ಮತ್ತು ಶಾಸನ ತರಗತಿಗಳು

೨೦೨೧ರ ಜೂನ್ ಎರಡನೇ ವಾರದಿಂದ ಹಳಗನ್ನಡ ಮತ್ತು ಶಾಸನ ತರಗತಿಗಳನ್ನು ಜಾಲಗೋಷ್ಠಿಯ ಮೂಲಕ ಪ್ರಾರಂಭಿಸಲಾಗುತ್ತದೆ. ಆಸಕ್ತರು ೩೧ ಮೇ ೨೦೨೧ರ ವರೆಗೆ ದೂರವಾಣಿಯ ಮೂಲಕ ಅಥವಾ ಇ ಮೇಲ್ ಕಳಿಹಿಸುವ ಮೂಲಕ ನೋಂದಾಯಿಸಿ ಕೊಳ್ಳಲು ಕೋರಲಾಗಿದೆ.

ದೂರವಾಣಿಯ ಸಂಪರ್ಕ ಸಂಖ್ಯೆ : ೦೮೦-೨೬೬೧೫೮೭೭
ಇಮೇಲ್- **bmsritrust@gmail.com**

೨೭-೦೩-೨೦೨೧

## ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರಕ್ರಮ

**ಸ್ಥಾಪಕರು : ಶ್ರೀ ಕೆ. ಕಂಠಯ್ಯ, ಶ್ರೀ ಕೆ.ಎಸ್. ಚಂದ್ರಶೇಖರ್**

**ಕರ್ನಾಟಕ ಶಾಸ್ತ್ರೀ ಸಂಗೀತ**

**ವಿದುಷಿ ಶ್ರೀಮತಿ ನವ್ಯನಾಗರಾಜ್ ಮತ್ತು ತಂಡದಿಂದ**



ಈ ದತ್ತಿಯಡಿಯಲ್ಲಿ ಕರ್ನಾಟಕ ಶಾಸ್ತ್ರೀಯ ಕಾರ್ಯಕ್ರಮವನ್ನು ಪ್ರಸಿದ್ಧ ಗಾಯಕಿ ವಿದುಷಿ ಶ್ರೀಮತಿ ನವ್ಯಾ ನಾಗರಾಜ್‌ರವರು ಯಶಸ್ವಿಯಾಗಿ ನಡೆಸಿಕೊಟ್ಟರು. ಸುಮಾರು ೮೦ ನಿಮಿಷಗಳವರೆಗೂ ನಿರರ್ಗಳವಾಗಿ ಸುಶ್ರಾವ್ಯವಾಗಿ ಹಾಡಿದ ಶ್ರೀಮತಿ ನವ್ಯ ನಾಗರಾಜ್‌ರವರು ತಮ್ಮ ಅದ್ಭುತ ಪ್ರತಿಭೆಯ ಮೂಲಕ ರಸಿಕರನ್ನು ರಸಾನುಭವದಲ್ಲಿ ತೇಲಿಸಿದರು. ಅವರ ಹಾಡುಗಾರಿಕೆಗೆ ಪಕ್ಕವಾದ್ಯಗಳಲ್ಲಿ ವಿದುಷಿ ಶ್ರೀಮತಿ ಪ್ರೇಮಾ ವಿವೇಕ್‌ರವರು ಪಿಟೀಲು ವಾದನದಲ್ಲಿ ಹಾಗೂ ವಿದ್ವಾನ್ ಶ್ರೀ ನರಸಿಂಹನ್‌ರವರು ಮೃದಂಗ ವಾದನದಲ್ಲಿಯೂ ಸಮರ್ಥವಾಗಿ ಜೊತೆ ನೀಡಿದರು.

ವಿದುಷಿ ನವ್ಯ ನಾಗರಾಜ್‌ರವರು ಮೊದಲಿಗೆ ಡಾ. ಬಾಲಮುರಳಿಕೃಷ್ಣ ವಿರಚಿತ ಕೃತಿಯಾದ ಏ ನಾದಮುಲಾ ಎಂಬ ವರ್ಣವನ್ನು ನಾಟ ರಾಗದಲ್ಲಿ ಪ್ರಸ್ತುತ ಪಡಿಸಿದರು. ನಂತರದಲ್ಲಿ ಮುತ್ತು ಸ್ವಾಮಿ ದೀಕ್ಷಿತರ್‌ರವರ ಸಿದ್ಧಿವಿನಾಯಕಮ್ ಕೃತಿಯನ್ನು ಷಣ್ಮುಖಪ್ರಿಯ ರಾಗದಲ್ಲಿ ಹಾಡಿ ರಂಜಿಸಿದರು. ಇದಾದ ಮೇಲೆ, ಮಹಾರಾಜ ಸ್ವಾತಿ ತಿರುನಾಳ್ ವಿರಚಿತ ರಚನೆ ಪರಮ ಪುರುಷವನ್ನು ವಸಂತ ರಾಗದಲ್ಲಿ ಪ್ರಸ್ತುತ ಪಡಿಸಿದರು. ತದನಂತರದಲ್ಲಿ ಮೈಸೂರು ವಾಸುದೇವಾಚಾರ್ಯರ ರಚನೆಯಾದ ರಾರಾ ರಾಜೀವ ಲೋಚನ ರಾಮ ಎಂಬ ಕೃತಿಯನ್ನು ಮೋಹನ ರಾಗದಲ್ಲಿ ಸುಲಲಿತವಾಗಿ ಹಾಡಿ ಸಂಗೀತಪ್ರಿಯರ ಮನಗೆದ್ದರು. ಕೊನೆಯಲ್ಲಿ ಕನಕದಾಸರ ಪ್ರಸಿದ್ಧ ಕೀರ್ತನೆಯಾದ ತೊರೆದು ಜೀವಿಸಬಹುದೇ ಎಂಬ ಕೃತಿಯನ್ನು ಸಿಂಧುಭೈರವಿ ರಾಗದಲ್ಲಿ ಸೊಗಸಾಗಿ ಹಾಡಿದರು. ಕಾರ್ಯಕ್ರಮವು ಮಂಗಳದೊಂದಿಗೆ ಮುಗಿಯಿತು. ನಿರೂಪಣಾ/ ಸ್ವಾಗತ ಕಾರ್ಯವನ್ನು ಡಾ.ಬಿ.ಸಿ.ರಾಜಕುಮಾರ್‌ರವರು ಹಾಗೂ ವಂದನಾರ್ಪಣಾ ಕಾರ್ಯವನ್ನು ಡಾ.ಹೆಚ್.ಎಸ್.ಎಂ.ಪ್ರಕಾಶ್‌ರವರು ಮಾಡಿದರು.

೧೫-೪-೨೦೨೧

## ಶ್ರೀಮತಿ ರುಕ್ಮಿಣಮ್ಮ-ಸೀತಾರಾಮ್ ದತ್ತಿ ಉಪನ್ಯಾಸ ಕಾರ್ಯಕ್ರಮ

**ಉಪನ್ಯಾಸಕರು : ಡಾ. ಬೈರಮಂಗಲ ರಾಮೇಗೌಡ**

**ನಿವೃತ್ತ ಪ್ರಾಧ್ಯಾಪಕರು ಮತ್ತು ಖ್ಯಾತ ಲೇಖಕರು**

**ವಿಷಯ: ಮಧುರ ಚೆನ್ನ : ವ್ಯಕ್ತಿ ಮತ್ತು ಸಾಹಿತ್ಯ**

ಪ್ರಸಿದ್ಧ ಸಾಹಿತಿ, ಭಾಷಣಕಾರರಾದ ಡಾ. ಬೈರಮಂಗಲ ರಾಮೇಗೌಡರವರು 'ಮರೆಯಬಾರದ ಸಾಹಿತಿಶ್ರೇಷ್ಠರು' ಮಾಲಿಕೆಯಡಿಯಲ್ಲಿ "ಮಧುರ ಚೆನ್ನ: ವ್ಯಕ್ತಿ ಮತ್ತು ಸಾಹಿತ್ಯ" ವಿಷಯದ ಬಗ್ಗೆ ಈ ದತ್ತಿ ಉಪನ್ಯಾಸನವನ್ನು ನಡೆಸಿಕೊಟ್ಟರು.

ನವೋದಯದ ಮಹತ್ವದ ಕವಿಗಳಲ್ಲಿ ಒಬ್ಬರು ಮಧುರ ಚೆನ್ನರು. ಹಲಸಂಗಿ ಗೆಳೆಯರಲ್ಲಿ ಒಬ್ಬರು. ಅಂಬಿಕಾತನಯದತ್ತರ ಅತ್ಯಂತ ಆಪ್ತರಲ್ಲಿ ಒಬ್ಬರು. ಮಧುರ ಚೆನ್ನರು ಬರೆದಿದ್ದು ಕೆಲವೇ ಸಂಕಲನಗಳು ಮಾತ್ರ. ಆದರೆ ಅವೆಲ್ಲವೂ ಮಹತ್ವದ ಕವನಗಳು ಎಂದು ತಮ್ಮ ಸ್ವಾಗತ/ ಪ್ರಾಸ್ತಾವಿಕ ನುಡಿಗಳಲ್ಲಿ ಡಾ. ಆರ್. ಲಕ್ಷ್ಮೀನಾರಾಯಣರವರು ಹೇಳಿ ಎಲ್ಲರಿಗೂ ಸ್ವಾಗತವನ್ನು ಬಯಸಿದರು. ತಮ್ಮ ಉಪನ್ಯಾಸದ ಪ್ರಾರಂಭದಲ್ಲಿ ಡಾ. ಬೈರಮಂಗಲ ರಾಮೇಗೌಡರು ಇಂದು ಕೊರೋನಾದಿಂದಾಗಿ ಮರಣ ಹೊಂದಿದ ಸಾಹಿತಿಗಳಾದ ಡಾ. ರೇಖಾ ಕೆ.ಜಿ ಹಾಗೂ ಡಾ. ನಿಂಗಮಾರಯ್ಯರವರಿಗೆ ನಮನ ಸಲ್ಲಿಸಿ ಮುಂದುವರಿದು, ಮಧುರಚೆನ್ನ ಅವರ ಬದುಕು ಮತ್ತು ಬರಹದ ಬಗ್ಗೆ ವಿಸ್ತೃತವಾದ ಮಾಹಿತಿಯನ್ನು ನೀಡಿದರು. ಕೃಷಿ ಕಾರ್ಯದಲ್ಲಿ ತೊಡಗಿದ್ದರೂ ಸೃಜನಶೀಲ ಕಾವ್ಯರಚನೆ ಹಾಗೂ ಗಂಭೀರವಾದ ಆಧ್ಯಾತ್ಮಿಕ ಚಿಂತನೆಗಳಿಗೆ ತೆರೆದುಕೊಂಡವರು ಮಧುರ ಚೆನ್ನರು.

ಚೆನ್ನಮಲ್ಲಪ್ಪನವರು (ನಿಜನಾಮಧೇಯ) ಹಲಸಂಗಿ ಗೆಳೆಯರ ಗುಂಪನ್ನು ಕಟ್ಟಿಕೊಂಡು ಸಾಹಿತ್ಯ ಕೃಷಿಯನ್ನು ಮಾಡಿದರು. ದೇವರ ಸಾಕ್ಷಾತ್ಕಾರದ ಹಂಬಲದಲ್ಲಿ ತಮ್ಮ ಜ್ಞಾನವನ್ನು ಅರಸುತ್ತಾ ಸಾಗುತ್ತಾರೆ. ರಾಮಕೃಷ್ಣ ಪರಮಹಂಸ, ವಿವೇಕಾನಂದ ಮತ್ತು ಅರವಿಂದರ ಸಾಹಿತ್ಯವನ್ನು ಮನಗತ ಮಾಡಿಕೊಳ್ಳುತ್ತಾರೆ.

ಕೊನೆಗೆ ಅಜ್ಞೇಯತಾವಾದಿ ಎಂದು ಘೋಷಿಸಿಕೊಳ್ಳುತ್ತಾರೆ. ಆಸ್ತಿಕತೆ ಮತ್ತು ನಾಸ್ತಿಕತೆಯ ನಡುವಿನ ಮನಸ್ಥಿತಿಯಲ್ಲಿ ಬದುಕಿದರು. ಅವರು ಬರೆದದ್ದು ಒಂದೇ ಕಾವ್ಯ ಸಂಕಲನ: 'ನನ್ನ ನಲ್ಲ'. ಇದರಲ್ಲಿ ೧೦೧ ಕವನಗಳಿವೆ. ಐದು ಎಸಳುಗಳಿವೆ (ಅಧ್ಯಾಯಗಳಿವೆ). ಇದು ಬಹಳ ಜನಪ್ರಿಯವಾಯಿತು.

ವಿಶ್ವಕನ್ನಡ ಸಮ್ಮೇಳನದ ಸಮಯದಲ್ಲಿ ಇದರ ಮರುಪ್ರಕಟಣೆಯಾಯಿತು. ಇದಕ್ಕೆ ಮೊದಲು ೧೯೩೧-೩೭ರ ಅವಧಿಯಲ್ಲಿ ಪೂರ್ವರಂಗ, ಕಾಳರಾತ್ರಿ, ಆತ್ಮ ಸಂಶೋಧನೆ, ಬೆಳಗು ಎಂಬ ಗದ್ಯಕೃತಿಗಳನ್ನು ಪ್ರಕಟಿಸಿದರು. ಒಟ್ಟು ಐದು ಕೃತಿಗಳನ್ನಷ್ಟೇ ಬರೆದರೂ ಕೂಡ ಅವರು ನಮ್ಮ ಸಾಹಿತ್ಯದಲ್ಲಿ ವಿಶಿಷ್ಟ ಛಾಪನ್ನು ಮೂಡಿಸಿದ್ದಾರೆ. ಪೂರ್ವರಂಗದಲ್ಲಿ ತಮ್ಮ ಅಧ್ಯಾತ್ಮ ಜಿಜ್ಞಾಸೆಗೆ ಪ್ರವೇಶ ಪಡೆದ ವಿಚಾರವಿದೆ. ಕಾಳರಾತ್ರಿಯಲ್ಲಿ, ಕಾರ್ಗತ್ತಲಿನಲ್ಲಿ ಬೆಳಕಿನ ಕಿರಣವನ್ನು ಕಾಣುವ ಹಂಬಲದ ಬರಹವಿದೆ. ಪ್ರಶ್ನೆಗಳ ತಾಕಲಾಟವಿದೆ. ಆತ್ಮ ಸಂಶೋಧನೆ ಮತ್ತು ಬೆಳಗು ಕೃತಿಗಳಲ್ಲಿ




ತಾವು ಕಂಡ ಜ್ಞಾನಕಿರಣಗಳ ಬಗ್ಗೆ ವಿವರಿಸಿದ್ದಾರೆ. ಇವರಿಗೆ ಬಿಜಾಪುರದ ಹಣಮಂತರಾಯರು ಎಂಬ ಗುರುವಿನ ಮಾರ್ಗದರ್ಶನ ಇಂಗ್ಲೀಷ್ ಸಾಹಿತ್ಯದ ಅಧ್ಯಯನಕ್ಕಾಗಿ ದೊರಕುತ್ತದೆ.

ಮೂಲ ಇಂಗ್ಲೀಷ್ ಆಧ್ಯಾತ್ಮಿಕ ಗ್ರಂಥಗಳ ಅಧ್ಯಯನವನ್ನು ಮಾಡಿ ತಮ್ಮ ಜ್ಞಾನ ವಿಸ್ತಾರವನ್ನು ಪಡೆದರು. ಇದರ ಬಗೆಗೆ ಹಾಗೂ ಅವರು ವಿವಿಧ ವಿಷಯಗಳ ಬಗ್ಗೆ ಸುಮಾರು ೬೦೦ಲೇಖನಗಳನ್ನು ಬರೆದಿದ್ದರು. ಇವೆಲ್ಲವನ್ನೂ ಸಂಪಾದಿಸಿ ಗುರುಲಿಂಗ ಕಾಪಸೆಯವರು ಸಂಕಲನರೂಪದಲ್ಲಿ ಪ್ರಕಟಿಸಿದ್ದಾರೆ ಎಂದು ಹೇಳಿದರು.

ಡಾ.ಹೆಚ್.ಎಸ್.ಎಂ.ಪ್ರಕಾಶ್‌ರವರು ಎಲ್ಲರನ್ನೂ ವಂದಿಸಿದರು.

ಕಾರ್ಯಕ್ರಮವನ್ನು ಡಾ.ಬಿ.ಸಿ.ರಾಜಕುಮಾರ್ ರವರು ಜಾಲಗೋಷ್ಠಿಯ ಮೂಲಕ ಸಂಯೋಜಿಸಿದರು.

೨ನೇ ಪುಟದಿಂದ

ಏಪ್ರಿಲ್ ೨, ೨೦೨೧ರಂದು ಆರಂಭದಲ್ಲಿ ಜರುಗಿದ ಉದ್ಘಾಟನಾ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಅಜಕ್ಕಳ ಗಿರೀಶ ಭಟ್ಟರು ಮಾತನಾಡುತ್ತ, ಬದಲಾದ ಕಾಲಘಟ್ಟದಲ್ಲಿ ಅನುವಾದ ಕ್ಷೇತ್ರವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿದೆ. ಹಾಗಾಗಿ ಈ ಕ್ಷೇತ್ರದಲ್ಲಿ ಕೌಶಲ ವೃದ್ಧಿಸಿಕೊಂಡಲ್ಲಿ ಉತ್ತಮ ಅವಕಾಶಗಳಿವೆ ಎಂದು ಹೇಳಿದರು. ಅನುವಾದಕರಿಗೆ ಬೇಡಿಕೆ ಹೆಚ್ಚುತ್ತಿದೆ. ಅನುವಾದ ಮಾಡುವಾಗ ಮೂಲ ಕೃತಿಗೆ ಚ್ಯುತಿ ಬರದಂತೆ ಎಚ್ಚರವಹಿಸಬೇಕಾಗುತ್ತದೆ. ಕುವೆಂಪು ಪ್ರಾಧಿಕಾರದಿಂದ ಕೂಡ ಅನುವಾದಕರ ತಂಡವನ್ನು ಸಿದ್ಧಪಡಿಸಲಾಗುತ್ತಿದೆ ಎಂದರು.

ಸಾಹಿತ್ಯೇತರ ಕ್ಷೇತ್ರಗಳಲ್ಲಿಯೂ ಅನುವಾದದ ಅವಶ್ಯಕತೆಯಿದೆ. ಆದ್ದರಿಂದ ಯುವ ಜನತೆಯನ್ನು ಈ ಕ್ಷೇತ್ರದೆಡೆ ಕರೆತರುವ ಕೆಲಸವಾಗಬೇಕಿದೆ ಎಂದು ಡಾ. ಆರ್. ಲಕ್ಷ್ಮೀನಾರಾಯಣರವರು ಹೇಳಿದರು. ಅನುವಾದಕರಿಗೆ ಭಾಷೆಯ ಮೇಲೆ ಹಿಡಿತ ಇರುವ ಜೊತೆಗೆ ಬರವಣಿಗೆ ಕೌಶಲ ಅಗತ್ಯ ಎಂದು ಡಾ. ಅಬ್ದುಲ್ ರೆಹಮಾನ್ ಪಾಷಾ ಹೇಳಿದರು.

ಮೊದಲ ದಿನದ ಗೋಷ್ಠಿಗಳನ್ನು ಡಾ. ರೆಹಮಾನ್ ಪಾಷಾರವರು, ಆರಂಭಿಕ ವಿಷಯಗಳ ಬಗ್ಗೆ ಗಮನ ಸೆಳೆದು ನಂತರದಲ್ಲಿ ಅನುವಾದದ ವ್ಯಾಖ್ಯೆಗಳು, ತತ್ವಗಳು, ಪದ್ಧತಿಗಳ ಬಗ್ಗೆ ಪಿಪಿಟಿ ಉಪನ್ಯಾಸಗಳನ್ನು ನೀಡಿ ಮನೆಯಲ್ಲಿನ ಅಭ್ಯಾಸಕ್ಕಾಗಿ ಕೆಲವು ವಿಷಯಗಳನ್ನು ಶಿಬಿರಾರ್ಥಿಗಳಿಗೆ ನೀಡಿದರು. ಎರಡನೇ ದಿನದ ಮೊದಲ ಗೋಷ್ಠಿಯಲ್ಲಿ ಡಾ. ಆರ್. ಲಕ್ಷ್ಮೀನಾರಾಯಣರವರು ಪಾರಿಭಾಷಿಕ ಪದಗಳ ಸಮಸ್ಯೆ–ಪರಿಹಾರ, ಅನುವಾದದಲ್ಲಿನ ಭಾಷಾ ಸೂಕ್ಷ್ಮಗಳ ಬಗ್ಗೆ ಉಪನ್ಯಾಸ ನೀಡಿದರು. ಎರಡನೇ ಗೋಷ್ಠಿಯಲ್ಲಿ, ಅನುವಾದದಲ್ಲಿ ಭಾಷಾ ರಚನೆಯ ಬಗ್ಗೆ ಡಾ. ರೆಹಮಾನ್ ಪಾಷಾರವರು ಹೇಳುತ್ತ ಅನಿವಾರ್ಯವಾದಾಗ ಹೊಸ ಕನ್ನಡ ಪದಗಳ ಸೃಜನೆಯ ಬಗ್ಗೆ ಸೂಚನಾತ್ಮಕ ಸಲಹೆಗಳನ್ನು ನೀಡಿದರು.

ಮೂರನೇ ಗೋಷ್ಠಿಯಲ್ಲಿ, ಅನುವಾದ ಕಾರ್ಯದಲ್ಲಿ ಅಗತ್ಯವಾಗಿ ಬೇಕಾದ ಸಾಧನ, ಸಲಕರಣೆಗಳ ಬಗ್ಗೆ ಪಿಪಿಟಿ ಉಪನ್ಯಾಸವನ್ನು ನೀಡಿದ ಡಾ. ಬಿ.ಸಿ.ರಾಜಕುಮಾರ್ ಅವರು ಕನ್ನಡಾನುವಾದದ ಸಲಕರಣೆಗಳು ಎಂಬ ವಿಷಯದ ಬಗ್ಗೆ ಕಾರ್ಯಾಗಾರದಲ್ಲಿ ವಿವರಗಳನ್ನು ಕೊಟ್ಟರು.

ಅನುವಾದಕ್ಕೆ ಬೇಕಾದ ಗಣಕಯಂತ್ರ, ಅದಕ್ಕೆ ಬೇಕಾದ ಅಂತರ್ಜಾಲದ ತಂತ್ರಾಂಶಗಳ ಬಗ್ಗೆ ವಿವರಿಸಲಾಯಿತು. ನಿಘಂಟುಗಳು, ಪದಕೋಶಗಳು, ಅನುವಾದ ತಂತ್ರಾಂಶಗಳು, ನಿಘಂಟು ಮತ್ತು ಪದಕೋಶಗಳ ವ್ಯತ್ಯಾಸಗಳು. ವಿವಿಧ ಇಲಾಖೆಗಳ ಪದಕೋಶ ಮತ್ತು ನಿಘಂಟುಗಳ ಪುಸ್ತಕ ಮತ್ತು ಅಂತರ್ಜಾಲ ಮಾಹಿತಿಗಳ ವಿವರಣೆ. ತರಬೇತಿ ಕೇಂದ್ರಗಳು. ಉದ್ಯೋಗಾವಕಾಶಗಳನ್ನು ವಿವರಿಸಿದರು. ನಂತರದ ಗೋಷ್ಠಿಯಲ್ಲಿ ಶಿಬಿರಾರ್ಥಿಗಳು ಮುಕ್ತ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಸಮಸ್ಯೆಗಳನ್ನು ಹೇಳಿಕೊಂಡರು. ಉಪಸ್ಥಿತರಿದ್ದ ಸಂಪನ್ಮೂಲ ವ್ಯಕ್ತಿಗಳು ಸೂಕ್ತ ಪರಿಹಾರಗಳನ್ನು ಸೂಚಿಸಿದರು.

ಮೂರನೇ ದಿನದ ಮೊದಲ ಗೋಷ್ಠಿಯಲ್ಲಿ ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ಲಿಪ್ಯಂತರದ ಸಂದರ್ಭಗಳು ಮತ್ತು ಪ್ರಮಾದಗಳ ಬಗ್ಗೆ ಪಿಪಿಟಿ ಉಪನ್ಯಾಸದಲ್ಲಿ ತಿಳಿಸುತ್ತ ಮೂಲ ಭಾಷೆಯ ಪದಗಳನ್ನು ಅಲ್ಲಿನವರು ಹೇಗೆ ಬಳಸುತ್ತಾರೆಯೋ ಹಾಗೆಯೇ ಸಂವಾದಿ ಭಾಷೆಗೆ ಲಿಪ್ಯಂತರ ಮಾಡಬೇಕು ಎಂದು ಉದಾಹರಣೆಗಳೊಂದಿಗೆ ವಿವರಿಸಿದರು. ಅನುವಾದ, ಅನುಸೃಷ್ಟಿ, ಮರುಸೃಷ್ಟಿ ರೂಪಾಂತರ, ಅನುಕರಣೆ, ಅಳವಡಿಕೆಗಳಲ್ಲಿನ ವ್ಯತ್ಯಾಸಗಳ ಬಗ್ಗೆ ವಿವರಿಸಿ, ಆದಷ್ಟೂ ಮೂಲ ಬರಹದ ಆಶಯ, ಭಾವ, ಆಕಾರ, ಶೈಲಿ, ಲಯಗಳನ್ನು ಸಂವಾದಿ ಭಾಷೆಯಲ್ಲಿ ಸಾಹಿತ್ಯಕ ಹಾಗೂ ಸಾಹಿತ್ಯೇತರ ಅನುವಾದ ಕಾರ್ಯಗಳಲ್ಲಿ ಮೂಡಿಸಬೇಕು ಎಂದರು. ನಂತರದ ಗೋಷ್ಠಿಗಳಲ್ಲಿ, ವೃತ್ತಿಯಾಗಿ



ಅನುವಾದದ ಬಗ್ಗೆ ಮತ್ತು ಮತ್ತಷ್ಟು ಸಾಧನ ಸಲಕರಣೆಗಳ ಬಗ್ಗೆ ಡಾ. ರೆಹಮಾನ್ ಪಾಷರವರು ಪಿಪಿಟಿ ಉಪನ್ಯಾಸವನ್ನು ನೀಡಿದರು.

ಶಿಬಿರದ ಕೊನೆಯ ಭಾಗವಾದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಟಿ.ಎಸ್. ನಾಗಾಭರಣರವರು ಮಾತನಾಡುತ್ತ ತಮ್ಮ ಅನುಭವ ಕ್ಷೇತ್ರವಾದ ಚಲನಚಿತ್ರ, ನಾಟಕ ರಂಗಗಳಲ್ಲಿ ಹೇಗೆ ಪ್ರಸಿದ್ಧ ಅನುವಾದ ಕೃತಿಗಳನ್ನು ಅಳವಡಿಸಿಕೊಳ್ಳಲಾಗಿದೆ.

ಇವು ಕನ್ನಡ ಕಲಾಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧ ಪ್ರಯೋಗಗಳಾಗಿವೆ ಎಂದು ತಿಳಿಸಿದರು. ಚಲನಚಿತ್ರೋತ್ಸವಗಳಿಗೆ ಹೋಗುವ ಸಿನಿಮಾಗಳಿಗೆ ಇಂಗ್ಲೀಷ್ ಉಪಶೀರ್ಷಿಕೆಗಳು ಅನಿವಾರ್ಯ. ಹಾಗೆಯೇ ಬೇರೆ ಭಾಷೆಯ ಚಿತ್ರಗಳು ಕನ್ನಡಕ್ಕೆ ಬರುವಾಗ ಕನ್ನಡ ಪದಗಳನ್ನು ಅತ್ಯಂತ ಸೂಕ್ತವಾಗಿ, ಸೂಕ್ಷ್ಮವಾಗಿ ಬಳಸಬೇಕು.

ಇದು ಉನ್ನತ ಮಟ್ಟದ ಕೌಶಲ್ಯವನ್ನು ಬಯಸುತ್ತದೆ ಎಂದು ಹೇಳಿದರು. ಮುಂದಿನ ದಿನಗಳಲ್ಲಿ ರಾಜ್ಯದಾದ್ಯಂತ ಇಂತಹ ಶಿಬಿರಗಳನ್ನು ಆಯೋಜಿಸಿ ಸುಮಾರು ೫೦೦ ಅನುವಾದಕರ ತಂಡವನ್ನು ರೂಪಿಸಲು ಪ್ರಾಧಿಕಾರವು ಬಯಸುತ್ತದೆ ಎಂದು ತಿಳಿಸಿದರು. ಪ್ರಾಧಿಕಾರದ ಸಕ್ರಿಯ ಸಂಪರ್ಕಗಳಿಂದಾಗಿ ಬೆಂಗಳೂರಿನಲ್ಲಿನ ಹೆಚ್ಚೆಚ್ಚು ಕನ್ನಡೇತರ ಸಂಸ್ಥೆಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಬಳಸುವಂತೆ ಮಾಡಲಾಗುತ್ತಿದೆ ಹಾಗೂ ಈ ನಿಟ್ಟಿನಲ್ಲಿ ಕನ್ನಡೇತರರಿಗೆ ಕನ್ನಡ ಕಲಿಕಾ ಕಾರ್ಯಕ್ರಮಗಳನ್ನೂ ಸಹ ಹಮ್ಮಿಕೊಳ್ಳಲಾಗುತ್ತಿದೆ ಎಂದು ಹೇಳಿದರು. ಶಿಬಿರದಲ್ಲಿ ಭಾಗವಹಿಸಿದ ಎಲ್ಲಾ ಶಿಬಿರಾರ್ಥಿಗಳಿಗೂ ಮುಖ್ಯ ಅತಿಥಿಗಳು ಅಭಿನಂದನಾ ಪತ್ರಗಳನ್ನು ವಿತರಿಸಿದರು.

ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ಎಲ್ಲರನ್ನೂ ವಂದಿಸಿದರು.




# ಪತ್ರಿಕಾ ನೆನಪು






## 'ಬದಲಾದ ಕಾಲಘಟ್ಟದಲ್ಲಿ ಅನುವಾದ ಕ್ಷೇತ್ರ ವಿಸ್ತಾರ'

3/4/2021

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಬದಲಾದ ಕಾಲಘಟ್ಟದಲ್ಲಿ ಅನುವಾದ ಕ್ಷೇತ್ರವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿದೆ. ಹಾಗಾಗಿ, ಈ ಕ್ಷೇತ್ರದಲ್ಲಿ ಕೌಶಲ ವೃದ್ಧಿಸಿಕೊಂಡಲ್ಲಿ ಉತ್ತಮ ಅವಕಾಶಗಳಿವೆ' ಎಂದು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷ ಅಜಕ್ಕಳ ಗಿರೀಶ್ ಭಟ್ ತಿಳಿಸಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವು ನಗರದಲ್ಲಿ ಶುಕ್ರವಾರ ಹಮ್ಮಿಕೊಂಡಿದ್ದ ಕನ್ನಡ ಅನುವಾದ ಕಮ್ಮಟಕ್ಕೆ ಚಾಲನೆ ನೀಡಿ ಮಾತನಾಡಿದರು.

'ಕನ್ನಡದ ಪ್ರಮುಖ ಕೃತಿಗಳನ್ನು ಬೇರೆ ಭಾಷೆಗಳಿಗೆ ಹಾಗೂ ಅನ್ಯ ಭಾಷೆಗಳ ಕೃತಿಗಳನ್ನು ಕನ್ನಡಕ್ಕೆ ತರುವ ಕೆಲಸಗಳು ಹೆಚ್ಚಾಗಿ ನಡೆಯುತ್ತಿದೆ. ಹೀಗಾಗಿ, ಅನುವಾದಕರಿಗೆ ಬೇಡಿಕೆ ಹೆಚ್ಚುತ್ತಿದೆ. ಅನುವಾದ ಮಾಡುವಾಗ ಮೂಲ ಕೃತಿಗೆ ಚ್ಯುತಿ ಬರದಂತೆ ಎಚ್ಚರ ವಹಿಸಬೇಕಾಗುತ್ತದೆ. ಹೀಗಾಗಿ, ಭಾಷೆಗಳ ಮೇಲೆ ಹಿಡಿತ ಇರುವ ಜತೆಗೆ ಅರ್ಥ ವ್ಯತ್ಯಾಸವಾಗದಂತೆ ನೋಡಿಕೊಳ್ಳಬೇಕು. ಆದ್ದರಿಂದ ಅನುವಾದಕರಾಗುವವರು ಬರವಣಿಗೆಯ ಕೌಶಲ ವೃದ್ಧಿಸಿಕೊಳ್ಳಬೇಕು. ಭಾಷೆಯ ಮೇಲೆ ಅಭಿಮಾನವಿದ್ದಾಗ ಮಾತ್ರ ಭಾಷಾಂತರ ಸಾಧ್ಯ. ಅನುವಾದ ಕ್ಷೇತ್ರದಲ್ಲಿ ವಿಪುಲ ಉದ್ಯೋಗಾವಕಾಶಗಳಿವೆ. ನಮ್ಮ ಪ್ರಾಧಿಕಾರದಿಂದ ಕೂಡ ಅನುವಾದಕರ ಗುಂಪನ್ನು ಸಿದ್ಧಪಡಿಸಲಾಗುತ್ತಿದೆ' ಎಂದು ಹೇಳಿದರು.

ಪ್ರತಿಷ್ಠಾನದ ಅಧ್ಯಕ್ಷ ಆರ್. ಲಕ್ಷ್ಮೀನಾರಾಯಣ ಮಾತನಾಡಿ, 'ಇದೇ ಮೊದಲ ಬಾರಿಗೆ ಅನುವಾದಕ್ಕೆ ಸಂಬಂಧಿಸಿದ ಕಮ್ಮಟವನ್ನು ಆಯೋಜಿಸಲಾಗುತ್ತಿದೆ. ಹಲವಾರು ಕಾರ್ಯಕ್ಷೇತ್ರಗಳಲ್ಲಿ ಅನುವಾದ ಪ್ರಕ್ರಿಯೆ ಪ್ರಾಮುಖ್ಯತೆ ಪಡೆದುಕೊಂಡಿದೆ. ಹಾಗಾಗಿ, ಯುವಜನತೆಯನ್ನು ಈ ಕ್ಷೇತ್ರದೆಡೆ ಕರೆತರುವ ಕೆಲಸವಾಗಬೇಕಿದೆ. ಅದೇ ರೀತಿ, ಇಲ್ಲಿನ ಸಾಹಿತ್ಯ ಕೃತಿಗಳನ್ನು ಬೇರೆ ಬೇರೆ ಭಾಷೆಗೆ ಪರಿಚಯಿಸಲು ಅನುವಾದ ಸಹಾಯಕ' ಎಂದು ತಿಳಿಸಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯ ಪ್ರೊ. ಅಬ್ದುಲ್ ರಹಮಾನ್ ಪಾಷಾ, 'ಅನುವಾದಕರಿಗೆ ಭಾಷೆಯ ಮೇಲೆ ಹಿಡಿತ ಇರುವ ಜತೆಗೆ ಬರವಣಿಗೆ ಕೌಶಲ ಅಗತ್ಯ. ಸದ್ಯದ ಪರಿಸ್ಥಿತಿಯಲ್ಲಿ ಕೌಶಲ ಹೆಚ್ಚಿಸುವ ಕೆಲಸ ನಡೆಯಬೇಕು. ಈ ನಿಟ್ಟಿನಲ್ಲಿ ಮೂರು ದಿನಗಳ ಕಮ್ಮಟ ಹಮ್ಮಿಕೊಳ್ಳಲಾಗಿದೆ' ಎಂದು ವಿವರಿಸಿದರು.



3/4/21 ವಿಕ

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಬಿಎಂಶ್ರೀ ಪ್ರತಿಷ್ಠಾನದ ಸಂಯುಕ್ತಾಶ್ರಯದಲ್ಲಿ ಆಯೋಜಿಸಿರುವ ಮೂರು ದಿನಗಳ ಅನುವಾದ ಕಮ್ಮಟವನ್ನು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷ ಡಾ. ಅಜಕ್ಕಳ ಗಿರೀಶ ಭಟ್ ಶುಕ್ರವಾರ ಉದ್ಘಾಟಿಸಿದರು.



# ಎಂ.ವಿ.ಸಿ.
# ಬದುಕು ಬರಹ – ೧೫

– ಡಾ. ಪಿ.ವಿ. ನಾರಾಯಣ

ಹಿಂದಿನ ಸಂಚಿಕೆಯಿಂದ

ಎಂವಿಸೀ ಅವರ ಪದ್ಯಗಳಲ್ಲಿ ನಾವು ಕಾಣುವ ಮತ್ತೊಂದು ಮನಸ್ಥಿತಿಯೆಂದರೆ ಸಾಮಾಜಿಕ ಅಸಮಾನತೆ ಮತ್ತು ಬದುಕಿನಲ್ಲಿನ ಏರುಪೇರುಗಳ ಬಗೆಗಿನ ಕಳಕಳಿ. ಇದನ್ನೇ ಸಾಮಾಜಿಕ ಪ್ರಜ್ಞೆ ಎಂದು ಕರೆಯಬಹುದೇನೋ. ಎಳವೆಯಲ್ಲಿಯೇ ಇದನ್ನು ಮೈಗೂಡಿಸಿಕೊಂಡಿದ್ದ ಶ್ರೀಯುತರು ಬರೆದ ಕವನ 'ಬೀದಿಯೊಳಗಲೆಯುತಿಹ 'ಳಾರಿವಳು?' ಎಂಬ ಕವನವೇ ಇದಕ್ಕೆ ನಿದರ್ಶನ. ಅಷ್ಟು ಮಾತ್ರ ಅಲ್ಲ, ೧೯೪೪ ರಲ್ಲಿ ಪ್ರಕಟವಾದ 'ಹಕ್ಕಿ ಹಾಡು' ಕವನದಲ್ಲಿ ಬಡತನದ ಬೇಗೆ, ಭಿಕ್ಷುಕರ ದೀನ ಸ್ಥಿತಿ, ಹೊಟ್ಟೆ ಹೊರೆಯಲು ಬಡವರ ಶ್ರಮದುಡಿಮೆ ಮುಂತಾದ ವಸ್ತುವನ್ನು ಕುರಿತು ಬರೆದ ಪದ್ಯಗಳು ಹೆಚ್ಚಾಗಿವೆ. ಇದು ಒಬ್ಬ ಭಿಕ್ಷುಕಿಯನ್ನು ಕುರಿತ ಪದ್ಯ. ಮನೆಮನೆಗೆ ಹೋಗಿ ಹಾಡಿ ಬೇಡುವ ಈ ಹುಡುಗಿ ಮುಸಲ್ಮಾನರವಳು. ಯಾರೂ ಇವಳ ಬಗ್ಗೆ ಮರುಕವನು ತೋರ್ಪಡಿಸದಿರುವುದನ್ನು ಕಂಡು ಕವಿಯ ಮನಸ್ಸು ಮಮ್ಮಲ ಮರುಗುತ್ತದೆ; "ತಮತೆ ಜೀವಿಯೆಂದೆಣಿಸದಿಹ" ಜನರ ಬಗ್ಗೆ ಇವರಿಗೆ ಒಂದು ಬಗೆಯ ಕ್ರೋಧ. ಕವಿಯ ಮನಸ್ಸು ಭಿಕ್ಷುಕಿಯ ದಯನೀಯತೆಯನ್ನು ಚಿತ್ರಿಸಲು ತೊಡಗುತ್ತದೆ. ಇನ್ನೊಂದು ಪದ್ಯ 'ತಿರುಕಿಯ ಮೊರೆ' ತನ್ನನ್ನು ಕಾಪಾಡಲು ಸಮಾಜದ ಮೊರೆಹೋಗುವ ಪ್ರಸಂಗವಿದೆ. 'ಕವಳ ತಾಯಿ' ಎಂಬ ಭಿಕ್ಷುಕಿಯ ಬಗೆಗಿನ ಮತ್ತೊಂದು ಕವನವೂ ಇದೇ ಗೋಳಿನ ಚಿತ್ರಣವನ್ನೊಳಗೊಂಡಿದೆ. 'ಬಡವನ ಕೊಡಲಿ' ಸೌದೆ ಸೀಳುವ ಕೆಲಸ ಮಾಡಿ ಅನ್ನ ಸಂಪಾದಿಸುವವನ ಚಿತ್ರವನ್ನು ನೀಡುತ್ತದೆ. ಕನ್ನಡದಲ್ಲಿ ಪ್ರಗತಿಶೀಲ ಸಾಹಿತ್ಯ ಚಳವಳಿ ೧೯೪೦ ದಶಕದಲ್ಲಿ ಆರಂಭವಾಯಿತು. ಸಾಮಾಜಿಕ ಅಸಮಾನತೆಯ ವಿರುದ್ಧದ ಕೂಗು ಅದರ ಮುಖ್ಯ ಧ್ವನಿ. ಎಂವಿಸೀ ಮುಂದೆ ಆ ಚಳವಳಿಯ ಧ್ಯೇಯಧೋರಣೆಗಳನ್ನು ಟೀಕಿಸಿದರು. ಆದರೆ ಅದಿನ್ನೂ ಆರಂಭವಾಗುವ ಮುನ್ನವೇ ೧೯೩೧ ರಲ್ಲಿಯೇ ಬರೆದ 'ಎಚ್ಚರಿಕೆ' ಕವನವು ಮೃಷ್ಟಾನ್ನ ಭೋಜನವನ್ನು ಮಾಡುವವರು ಹಾಗೂ ನರಿನಾಯ್ಗಳಂತಹ ಜನರ ನಡುವಣ ತಾರತಮ್ಯವನ್ನು ಕಂಡು ಕ್ರುದ್ಧಗೊಳ್ಳುತ್ತದೆ. ಇಲ್ಲದವರ ಹಸಿವಿನ ಕೂಗಿಗೆ ಉತ್ತರಿಸದ, "ಧರ್ಮಶಾಸ್ತ್ರದ ಕಟ್ಟು, ವೇದಾಂತವೆಷ್ಟೆಷ್ಟು" ಕಟ್ಟಿಕೊಂಡ ಮೇಲ್ವರ್ಗದ ಜನಗಳನ್ನು ನೊಂದ ಜೀವಿಗಳು "ಯಮಧರ್ಮನೆದುರಿನಲಿ ನ್ಯಾಯವನ್ನು ಪಡೆದಾವು" ಎಂದು ಎಚ್ಚರಿಸುತ್ತದೆ ಈ ಕವನ. ಇಲ್ಲಿ ಅನ್ಯಾಯಕ್ಕೆ ಶಿಕ್ಷೆಯನ್ನು ಧಾರ್ಮಿಕ ನೆಲೆಯಲ್ಲಿ ಕಾಣಲಾಗಿದೆಯೇ ಹೊರತು ಸಾಮಾಜಿಕ ನೆಲೆಯಲ್ಲಿ ಅಲ್ಲ ಎಂಬುದು ಗಮನಾರ್ಹ.

ಹಸಿವೆ ಮನುಷ್ಯನ ಮೂಲಭೂತ ಸಮಸ್ಯೆ. "ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ ವಿಷವೇರಿತ್ತಯ್ಯಾ ಆಪಾದ ಮಸ್ತಕಕ್ಕೆ; ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ ಆತನೇ ಗಾರುಡಿಗ ಕಾಣಾ ರಾಮನಾಥ" ಎಂಬ ಜೇಡರ ದಾಸಿಮಯ್ಯನ ವಚನ ಹಸಿವಿನ ಭೀಕರವೂ ವ್ಯಾಪಕವೂ ಆದ ಸ್ವರೂಪವನ್ನು ಬಣ್ಣಿಸುತ್ತದೆ. ಸಮೃದ್ಧತೆಯ ನಡುವೆ ಮನುಷ್ಯನಿಂದ ನಿರ್ಮಿತವಾದ ಕೊರತೆಯ ವಾತಾವರಣ ಸಮಸ್ಯೆಯನ್ನು ಮತ್ತಷ್ಟು ಗಂಭೀರವಾಗಿಸುತ್ತದೆ. 'ಅಶೋಕ ಚಕ್ರ' ಸಂಕಲನದ 'ಹಸಿವು' ಅದರ ಎಂಬ ಕವನ ಹಸಿವಿನ ವಿಸ್ತೃತ ರೂಪಗಳನ್ನು ತೆರೆದು ತೋರಿಸುತ್ತದೆ.

ಹಸಿವು ಎಲ್ಲ ಮನುಷ್ಯರನ್ನೂ ಕಾಡುತ್ತಿರುವ ಪರಿ ವಿಸ್ಮಯಕಾರಿಯಾದುದು. ರಾಜಕಾರಣಿಗಳಿಗೆ ರಾಜ್ಯಗಳಿಕೆಯ ಹಸಿವಾದರೆ, ಸೇನಾಪತಿಗಳಿಗೆ ಕೀರ್ತಿಯ ಹಸಿವು; ವ್ಯಾಪಾರಿಗಳಿಗೆ ಲಾಭದ ಹಸಿವು. ಹೀಗಾಗಿ ತಮ್ಮ ತಮ್ಮ ವಲಯದಲ್ಲಿ ಇವರೆಲ್ಲ ಇತರರನ್ನು ಸುಲಿಗೆಮಾಡಿ ತಮ್ಮ ಹಸಿವನ್ನು ಹಿಂಗಿಸಿಕೊಳ್ಳುವಂಥವರು. ಇದರಿಂದ ಸಮಾಜದಲ್ಲಿ ಕ್ರೌರ್ಯತಾಂಡವ. ಹೀಗಾಗಿ ಕವಿ "ಬವರವೇ ಇಳೆ ಬಾಳು, ಬರವೆ ಬಡವರ ಪಾಲು, ಎಂದಿನಿಂದಿಲ್ಲಿವರೆಗೆ!" ಎಂದು ಹತಾಶೆಯನ್ನು ವ್ಯಕ್ತಪಡಿಸುತ್ತಾರೆ. (ಮುಂದುವರಿಯುವುದು)

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-4-2021**

೨೦-೪-೨೦೨೧

## ಶ್ರೀ ಸಿ.ಕೆ.ನಾಗರಾಜರಾವ್, ಶ್ರೀ ಕೆ.ಪಿ.ರಾವ್, ಶ್ರೀ ಕೊರಟಿ ಶ್ರೀನಿವಾಸರಾವ್ ದತ್ತಿ ಉಪನ್ಯಾಸ ಕಾರ್ಯಕ್ರಮ

### ಮರೆಯಬಾರದ ಶ್ರೇಷ್ಠ ಸಾಹಿತಿಗಳು ಮಾಲಿಕೆ

ವಿಷಯ : ಬಿ. ಪುಟ್ಟಸ್ವಾಮಯ್ಯ : ವ್ಯಕ್ತಿ ಮತ್ತು ಸಾಹಿತ್ಯ
ಉಪನ್ಯಾಸ : ಪ್ರೊ. ಕೃಷ್ಣಮೂರ್ತಿ ಹನೂರು

ಜಾಲಗೋಷ್ಠಿಯ ಮೂಲಕ ನಡೆದ ಈ ಕಾರ್ಯ ಕ್ರಮದಲ್ಲಿ ಡಾ. ಆರ್.ಲಕ್ಷ್ಮೀನಾರಾಯಣರವರು ಎಲ್ಲರನ್ನೂ ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಬಿ. ಪುಟ್ಟಸ್ವಾಮಯ್ಯನವರು ಪತ್ರಕರ್ತರಾಗಿ ಪ್ರಜಾವಾಣಿ ಸಂಪಾದಕರಾಗಿದ್ದವರು. ಚಲನಚಿತ್ರ ಕ್ಷೇತ್ರದಲ್ಲಿಯೂ ಕೆಲಸ ಮಾಡಿದವರು. ಡಾ. ಕೃಷ್ಣಮೂರ್ತಿ ಹನೂರರು ಖ್ಯಾತ ಸಾಹಿತಿಗಳು ಮತ್ತು ಪ್ರಾಧ್ಯಾಪಕರು. ಬಿ. ಪುಟ್ಟಸ್ವಾಮಯ್ಯನವರ ಜೀವನದ ಬಗ್ಗೆ ಪುಸ್ತಕವನ್ನು ಬರೆದಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಜಾನಪದ ಸಾಹಿತ್ಯ ತಜ್ಞರಾಗಿದ್ದವರು. ೩೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಶ್ರೀ ಸಿ.ಕೆ. ನಾಗರಾಜರಾವ್‌ರವರು ಮತ್ತು ಶ್ರೀ ಕೊರಟಿ ಶ್ರೀನಿವಾಸರಾವ್ ಅವರು ಐತಿಹಾಸಿಕ ಕಾದಂಬರಿಗಳನ್ನು ರಚಿಸಿದವರು. ಶ್ರೀ ಕೆ.ಪಿ.ರಾವ್‌ರವರು ನ್ಯಾಯ ಸುಧಾ ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು ಎಂದು ತಿಳಿಸಿದರು.

ಪ್ರೊ. ಹನೂರುರವರು ಮಾತನಾಡುತ್ತ ಅವರ ಗುರುಗಳಾದ ಎಂ.ವಿ.ಸೀತಾರಾಮಯ್ಯನವರು ಬಿ.ಎಂ.ಶ್ರೀ ಪ್ರತಿಷ್ಠಾನವನ್ನು ಆರಂಭಿಸಿದ ದಿನಗಳನ್ನು ಜ್ಞಾಪಿಸಿಕೊಂಡರು. ಬಿ.ಪುಟ್ಟಸ್ವಾಮಯ್ಯನವರು ೯ನೇ ತರಗತಿಗೇ ವಿದ್ಯಾಭ್ಯಾಸವನ್ನು ಅವರ ತಂದೆಯವರ ನಿಧನದ ಕಾರಣದಿಂದಾಗಿ, ನಿಲ್ಲಿಸಬೇಕಾಯಿತು. ಅವರು ಜೀವನದಲ್ಲಿ ಬಹಳಷ್ಟು ಕಲಿತು ವಿದ್ವಾಂಸರಾದರು.

ಪತ್ರಕರ್ತರಾಗಿ ನೂರಾರು ಲೇಖನಗಳನ್ನು ಬರೆದರು. ೨೨ ಶ್ರೇಷ್ಠ ಐತಿಹಾಸಿಕ ಹಾಗೂ ಸಾಮಾಜಿಕನಾಟಕಗಳನ್ನು ಮತ್ತು ೨೭ ಐತಿಹಾಸಿಕ ಕಾದಂಬರಿಗಳನ್ನು ಬರೆದರು. ಒಂದಕ್ಕಿಂತಲೂ ಒಂದು ಮಿಗಿಲಾದ ಕೃತಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಮೊದಲಿಗೆ ನಾಡಿನಾದ್ಯಂತ ಜನಪ್ರಿಯ ಬಯಲು ನಾಟಕವಾಗಿ ಅಭಿನಯಿಸಲ್ಪಟ್ಟ 'ಕುರುಕ್ಷೇತ್ರ' ನಾಟಕವನ್ನು ಬರೆದರು. ನಂತರ ಯಾಜ್ಞಸೇನಿ ಎಂಬ ದ್ರೌಪದಿ ಕೇಂದ್ರಿತ ನಾಟಕವನ್ನು ಬರೆದು ಅದರಲ್ಲಿ ಮಹಿಳಾ ಸಂವೇದನೆಯನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ.

ನಂತರದಲ್ಲಿ'ಗೌತಮಬುದ್ಧ ಮತ್ತು ಬಾಹುಬಲಿ ನಾಟಕಗಳನ್ನು ರಚಿಸಿದರು. ಪೀರ್ ಸಾಹೇಬರು ಅವುಗಳಲ್ಲಿ ಅಭಿನಯಿಸಿದರು' ಎರಡರಲ್ಲಿಯೂ ಅಹಿಂಸಾ ಪ್ರಧಾನವಾದ ಕಥಾವಸ್ತುವಿದೆ, ನವೋದಯದ ಸಂದರ್ಭದಲ್ಲಿ ಮತ್ತು ಸ್ವಾತಂತ್ರೋತ್ತರ ಸಂದರ್ಭದಲ್ಲಿ ಸಾಹಿತ್ಯ ರಚನೆಯ ಮೂಲಕ ಸಮಾಜಕ್ಕೆ ಯಾವ ಸಂದೇಶವನ್ನು ತಾವು ನೀಡುತ್ತಿದ್ದೇವೆ ಎನ್ನುವುದರ ಬಗ್ಗೆ ಗಮನ ಹರಿಸುತ್ತಿದ್ದರು. ಬಂಗಾಳಿ ಸಾಹಿತ್ಯದ ದ್ವಿಜೇಂದ್ರಲಾಲ್ ಮತ್ತು ಬಂಕಿಮ ಚಂದ್ರ ಚಟರ್ಜಿಯವರ ಕಾದಂಬರಿಗಳನ್ನು ಕನ್ನಡಕ್ಕೆ ತಂದರು. ಒಂದು ಪತ್ತೆದಾರಿ ಕಾದಂಬರಿಯನ್ನೂ ಸಹ ರಚಿಸಿದ್ದಾರೆ. ಅವರ ಬಹುಚರ್ಚಿತ ಕಾದಂಬರಿಯಾದ ಕ್ರಾಂತಿಕಲ್ಯಾಣ ಕನ್ನಡ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲಾಗಿದೆ. ೧೯೬೪ರಲ್ಲಿ ಅದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ೧೨ನೇ ಶತಮಾನದ ಕಲ್ಯಾಣ ಚಳುವಳಿಯ ಅನೇಕ ಮುಖಗಳನ್ನು ಈ ಕಾದಂಬರಿಯಲ್ಲಿ ಬಿಂಬಿಸಲಾಗಿದೆ.

ಅಕ್ಕಮಹಾದೇವಿಯು ಕದಳಿಗೆ ತೆರಳುವ ಮುನ್ನ ಕೆಲಕಾಲ ಕಲ್ಯಾಣದಲ್ಲಿ ನೆಲೆಸಿ ಅನುಭವ ಮಂಟಪದ ಚರ್ಚೆಗಳಲ್ಲಿ ಭಾಗವಹಿಸಿದ್ದಳು.

೧೫ ರಿಂದ ೨೦ ವರ್ಷಗಳ ಅವಧಿಯಲ್ಲಿ ಮೇಲೆದ್ದ ಚಳುವಳಿ ಕ್ರಾಂತಿಯ ನಂತರದಲ್ಲಿ ಇನ್ನಿಲ್ಲವಾದರೂ ಅದು ಇಂದಿಗೂ ಪ್ರಸ್ತುತವಾಗಿದೆ. ಹಾಗೂ ಅಸ್ತಿತ್ವದಲ್ಲಿದೆ. ಯುವ ಸಮೂಹ ಬಿ. ಪುಟ್ಟಸ್ವಾಮಯ್ಯನವರನ್ನು ಓದಿನ ಮೂಲಕ ನೆನಪಿಸಿಕೊಳ್ಳಬೇಕು ಎಂದು ಡಾ. ಹನೂರು ಕೃಷ್ಣಮೂರ್ತಿಯವರು ಹೇಳಿದರು. ಡಾ. ಹೆಚ್.ಎಸ್.ಎಂ. ಪ್ರಕಾಶ್‌ರವರು ದತ್ತಿದಾನಿಗಳಿಗೆ ಹಾಗೂ ಉಪನ್ಯಾಸಕಾರರಿಗೆ ವಂದನೆಗಳನ್ನು ತಿಳಿಸಿದರು.

ಡಾ. ಬಿ.ಸಿ.ರಾಜಕುಮಾರ್ ಅವರು ಜಾಲಗೋಷ್ಠಿಯನ್ನು ನಿರ್ವಹಿಸಿದರು.

### ಹಸ್ತಪ್ರತಿ ವಿಭಾಗದ ವರದಿ

೧೫ ಏಪ್ರಿಲ್ ೨೦೨೧
ಜನವರಿ – ಮಾರ್ಚ್ ೨೦೨೧ರವರೆಗೆ

ಜನವರಿಯಿಂದ ಮಾರ್ಚ್೨೦೨೧ರವರೆಗೆ ಹಸ್ತಪ್ರತಿ ವಿಭಾಗವು ಸಂಗ್ರಹಾಲಯದಲ್ಲಿರುವ ಕಾಗದ ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ತೊಡಗಿಕೊಂಡಿದ್ದು, ೨೦೨೧ ಮಾರ್ಚ್ ಅಂತ್ಯದವರಗೆ ೯೨ ಕಾಗದದ ಹಸ್ತಪ್ರತಿಗಳನ್ನು ಸಂರಕ್ಷಿಸಿ ಸೂಚಿಯನ್ನು ಸಿದ್ಧಪಡಿಸಿದೆ.

ಕರ್ಲಮಂಗಲಂ ಶ್ರೀಕಂಠಯ್ಯ ಕುಟುಂಬದ ಕಡೆಯಿಂದ ಬಂದಿರುವ ತಾಳೆಗರಿ ಗ್ರಂಥಗಳ ಸಂರಕ್ಷಣಾ ಕಾರ್ಯ ಪೂರ್ಣ ಗೊಂಡಿದ್ದು, ಅವುಗಳ ವರ್ಣನಾತ್ಮಕ ಸೂಚಿಯೂ ಸಂಪೂರ್ಣವಾಗಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.......................................................................................

.............................................................................................

.............................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭